## ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ವಿದ್ಯಾಂಗ ಉಪನಿರ್ದೇಶಕರ ಕಛೇರಿ (ಆಡಳಿತ) ದ.ಕ. ಮಂಗಳೂರು

**ಸಂಖ್ಯೆ: ಎ4/3942/ಮಾ.ಹ.ಅ./1/2003-04, ದಿನಾಂಕ: 28ನೇ ಜೂನ್, 2004**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿ.ಪಿ.ಎ.ಆರ್. 56/ಯೋಮಸ 2002 (2) ದಿನಾಂಕ:18.07.2002.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 50 ಅ.ಅ.ವಿ.2002 ದಿನಾಂಕ: 21.10.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2002 ಈಗಾಗಲೇ ಜಾರಿಗೆ ಬಂದಿದ್ದು, ಸದ್ರಿ ಅಧಿನಿಯಮದ ಪ್ರಕಾರ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ಜಿಲ್ಲಾ ಮಟ್ಟದ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಕಂಡ ಅಧಿಕಾರಿಗಳನ್ನು ನೇಮಿಸಲಾಗಿದೆ.

| | | |
|---|---|---|
| 1) | ಸಾರ್ವಜನಿಕ ಪ್ರಾಧಿಕಾರ - | ಉಪನಿರ್ದೇಶಕರ ಕಛೇರಿ (ಆಡಳಿತ)<br>ಸಾರ್ವಜನಿಕ ಶಿಕ್ಷಣ ಇಲಾಖೆ, ದಕ್ಷಿಣ ಕನ್ನಡ, ಮಂಗಳೂರು. |
| 2) | ಸಕ್ಷಮ ಪ್ರಾಧಿಕಾರ - | ಉಪನಿರ್ದೇಶಕರು (ಆಡಳಿತ)<br>ಸಾರ್ವಜನಿಕ ಶಿಕ್ಷಣ ಇಲಾಖೆ, ದಕ್ಷಿಣ ಕನ್ನಡ, ಮಂಗಳೂರು. |
| 3) | ಅಪೀಲು ಪ್ರಾಧಿಕಾರ - | ಸಹ ನಿರ್ದೇಶಕರು,<br>ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು. |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿದಂತೆ 4 ಶೀರ್ಷಿಕೆಗಳಲ್ಲಿ ವಿವರಗಳನ್ನು ಸಾರ್ವಜನಿಕ ಪ್ರಕಟಣೆ ತಿಳಿಯಪಡಿಸಲಾಗಿದೆ.

### ಶೀರ್ಷಿಕೆ-1

**ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ಜಿಲ್ಲಾ ಹಂತದಲ್ಲಿ ಜಿಲ್ಲಾ ಉಪನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ ಕಛೇರಿಯು ಜಿಲ್ಲಾ ಪಂಚಾಯತ್ ವ್ಯಾಪ್ತಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಇಲ್ಲಿ ಜಿಲ್ಲಾ ವಿದ್ಯಾಂಗ ಉಪನಿರ್ದೇಶಕರು (ಆಡಳಿತ) ಇವರು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1. | ವಿದ್ಯಾಧಿಕಾರಿಗಳು - | 1 ಹುದ್ದೆ |
| 2. | ವಿಷಯ ಪರಿವೀಕ್ಷಣಾಧಿಕಾರಿಗಳು - | 5 ಹುದ್ದೆಗಳು |
| 3. | ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು - | 1 ಹುದ್ದೆ |
| 4. | ಪತ್ರಾಂಕಿತ ಸಹಾಯಕರು | 1 ಹುದ್ದೆ |
| 5. | ಉರ್ದು ಶಿಕ್ಷಣ ಸಂಯೋಜಕರು - | 1 ಹುದ್ದೆ |
| 6. | ಅಧೀಕ್ಷಕರು - | 3 ಹುದ್ದೆಗಳು |
| 7. | ಸಹಾಯಕ ಸಾಂಖ್ಯಿಕ ಅಧಿಕಾರಿಗಳು - | 1 ಹುದ್ದೆ |
| 8. | ಪ್ರಥಮ ದರ್ಜೆ ಸಹಾಯಕರು - | 8 ಹುದ್ದೆಗಳು |
| 9. | ಶೀಘ್ರಲಿಪಿಗಾರರು - | 1 ಹುದ್ದೆ |
| 10. | ದ್ವಿತೀಯ ದರ್ಜೆ ಸಹಾಯಕರು - | 5 ಹುದ್ದೆಗಳು |
| 11. | ಬೆರಳಚ್ಚುಗಾರರು - | 3 ಹುದ್ದೆಗಳು |
| 12. | ದ್ವಿ.ದ.ಸ. ಸಹಿತ ಬೆರಳಚ್ಚುಗಾರರು - | 1 ಹುದ್ದೆ |
| 13. | ವಾಹನ ಚಾಲಕರು - | 1 ಹುದ್ದೆ |
| 14. | ಡಿ. ದರ್ಜೆ ನೌಕರರು - | 7 ಹುದ್ದೆಗಳು |

ಈ ಕಛೇರಿಯ ಅಧೀನದಲ್ಲಿ ತಾಲ್ಲೂಕು ಮಟ್ಟದ ಕಛೇರಿಗಳು ಕಾರ್ಯನಿರ್ವಹಿಸುತ್ತಿವೆ.

| | | | |
|---|---|---|---|
| 1. | ಬಂಟ್ವಾಳ | 1. | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಬಂಟ್ವಾಳ |
| 2. | ಬೆಳ್ತಂಗಡಿ | 2. | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಬೆಳ್ತಂಗಡಿ |
| 3. | ಪುತ್ತೂರು | 3. | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಪುತ್ತೂರು |
| 4. | ಸುಳ್ಯ | 4. | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಸುಳ್ಯ |
| 5. | ಮಂಗಳೂರು ತಾಲ್ಲೂಕು | 5. | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಮಂಗಳೂರು ನಗರ ವಲಯ |
| | | 6. | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಮಂಗಳೂರು ತಾಲ್ಲೂಕು ವಲಯ |
| | | 7. | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಮೂಡಬಿದ್ರೆ ವಲಯ. |

ಪ್ರಾಥಮಿಕ ಮತ್ತು ಪ್ರೌಢಶಾಲಾ ಮಟ್ಟದವರೆಗೆ ವಿದ್ಯಾರ್ಥಿ/ ವಿದ್ಯಾರ್ಥಿನಿಯರಿಗೆ ಶಿಕ್ಷಣ ಒದಗಿಸುವುದು ಇಲಾಖೆಯ ಗುರಿಯಾಗಿರುತ್ತದೆ. ಜಿಲ್ಲಾ ಮಟ್ಟದ ಈ ಕಛೇರಿಯು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ನೀಡುವ ಶಿಕ್ಷಣ ಸಂಸ್ಥೆಗಳ ನಿಯಂತ್ರಣ

ಹೊಂದಿರುತ್ತದೆ. ಜಿಲ್ಲೆಯಲ್ಲಿನ 7 ಕ್ಷೇತ್ರ ಶಿಕ್ಷಣಾಧಿಕಾರಿಗಳ ವಲಯ ಮಟ್ಟದ ಕಛೇರಿಗಳ ಮೂಲಕ ಸರ್ಕಾರದ ಯೋಜನೆಗಳನ್ನು ಶಾಲಾ ಮಟ್ಟದಲ್ಲಿ ಅನುಷ್ಠಾನಗೊಳಿಸಲಾಗುತ್ತದೆ.

ಸರ್ವ ಶಿಕ್ಷಾ ಅಭಿಯಾನ ಕಛೇರಿಯಲ್ಲಿ ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1. | ಉಪ ಯೋಜನಾ ಸಮನ್ವಯಾಧಿಕಾರಿ - | 1 ಹುದ್ದೆ |
| 2. | ಸಹಾಯಕ ಯೋಜನಾ ಸಮನ್ವಯಾಧಿಕಾರಿ - | 2 ಹುದ್ದೆಗಳು |
| 3. | ಲೆಕ್ಕ ಅಧೀಕ್ಷಕರು - | 1 ಹುದ್ದೆ |
| 4. | ಪ್ರಥಮ ದರ್ಜೆ ಸಹಾಯಕರು - | 2 ಹುದ್ದೆಗಳು |
| 5. | ಪ್ರೋಗ್ರಾಮರ್ - | 1 ಹುದ್ದೆ |
| 6. | ಡೇಟಾ ಎಂಟ್ರಿ ಆಪರೇಟರ್ - | 2 ಹುದ್ದೆಗಳು |
| 7. | ಡಿ. ದರ್ಜೆ ನೌಕರರು - | 1 ಹುದ್ದೆ |

ಜಿಲ್ಲೆಯಲ್ಲಿನ 5 ತಾಲ್ಲೂಕು ಸಮನ್ವಯಾಧಿಕಾರಿಗಳ ಕ್ಷೇತ್ರ ಮಟ್ಟದ ಕಛೇರಿಗಳ ಮೂಲಕ ಸರ್ಕಾರದ ಯೋಜನೆಗಳನ್ನು ಶಾಲಾ ಮಟ್ಟದಲ್ಲಿ ಅನುಷ್ಠಾನಗೊಳಿಸಲಾಗುತ್ತದೆ.

ಜಿಲ್ಲಾ ಪಠ್ಯ ಪುಸ್ತಕ ಮಳಿಗೆಯಲ್ಲಿ ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1. | ಪ್ರಥಮ ದರ್ಜೆ ಸಹಾಯಕರು - | 2 ಹುದ್ದೆಗಳು |
| 2. | ಡಿ. ದರ್ಜೆ ನೌಕರರು | 3 ಹುದ್ದೆಗಳು |

ಜಿಲ್ಲಾ ಪಠ್ಯ ಪುಸ್ತಕ ಮಳಿಗೆಯಲ್ಲಿ ಸರ್ಕಾರದ ಮುದ್ರಣಾಲಯದಿಂದ ಸರಬರಾಜು ಮಾಡುವ ಪಠ್ಯ ಪುಸ್ತಕಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೂಲಕ ಶಾಲೆಗಳಿಗೆ 1 ರಿಂದ 10ನೇ ತರಗತಿಯವರೆಗೆ ವಿತರಣೆ ಮಾಡಲಾಗುವುದು.

**ಸಾಂಸ್ಥಿಕ ರಚನೆ:**



**ಶೀರ್ಷಿಕೆ-2**

**ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯ ವಿಧಾನ:**

ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಸಾರ್ವಜನಿಕ ಶಿಕ್ಷಣ ಇಲಾಖೆ, ಜಿಲ್ಲಾ ಉಪನಿರ್ದೇಶಕರ (ಆಡಳಿತ) ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಜಿಲ್ಲಾ ಮಟ್ಟದಲ್ಲಿ ಉಪನಿರ್ದೇಶಕರು (ಆಡಳಿತ) ಇವರು ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರಿಯಾಗಿರುತ್ತಾರೆ.

ಜಿಲ್ಲಾ ಉಪನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಕಛೇರಿಯಲ್ಲಿ ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳು ಈ ಕೆಳಗಿನಂತಿವೆ.

**ಆಡಳಿತ ಶಾಖೆ:**

1. ಕಛೇರಿ ಸಿಬ್ಬಂದಿ, ಅಧಿಕಾರಿಗಳ, ಪ್ರೌಢಶಾಲಾ ಮುಖ್ಯ ಶಿಕ್ಷಕರ, ಇತರ ಶಿಕ್ಷಕರ, ಲಿಪಿಕ ಸಿಬ್ಬಂದಿಯವರ ನೇಮಕಾತಿ, ಖಾಯಂ ಪೂರ್ವ ಸೇವಾವಧಿ ಘೋಷಣೆ, ವರ್ಗಾವಣೆ, ಬಡ್ತಿ, ಜೇಷ್ಠತಾ ಪಟ್ಟಿ, ನಿಯೋಜನೆ, ಸಿಬ್ಬಂದಿ ಸೇವಾ ಪುಸ್ತಕ, ರಜಾ ಮಂಜೂರಾತಿ ನಿರ್ವಹಣೆ ಇತ್ಯಾದಿ.
2. ಪ್ರಾಥಮಿಕ ಶಾಲಾ ಶಿಕ್ಷಕರ ಆಯ್ಕೆ, ನೇಮಕಾತಿ, ಜೇಷ್ಠತಾ ಪಟ್ಟಿ ಪ್ರಕಟಣೆ, ಬಡ್ತಿ, ನಿಯೋಜನೆ, ರಾಜೀನಾಮೆ, ನಿವೃತ್ತಿ, ಸ್ವಇಚ್ಛಾ ನಿವೃತ್ತಿ ಇತ್ಯಾದಿ.
3. ಹೊಸ ಪ್ರೌಢಶಾಲೆ ಮತ್ತು ಪ್ರಾಥಮಿಕ ಶಾಲೆಗಳ ಪ್ರಾರಂಭ, ಉನ್ನತೀಕರಣ.
4. ಸರ್ಕಾರಿ ಪ್ರಾಥಮಿಕ/ ಪ್ರೌಢ / ಕಛೇರಿ ಸಿಬ್ಬಂದಿಗಳ, ಪತ್ರಾಂಕಿತ ಅಧಿಕಾರಿಗಳ ಮೇಲಿನ ದೂರು/ ವಿಚಾರಣೆ/ ಶಿಸ್ತು ಕ್ರಮ ಇತ್ಯಾದಿ.
5. ಅನುಕಂಪ ನೇಮಕಾತಿಗಳು.
6. ಎಲ್ಲಾ ಸಿಬ್ಬಂದಿ ಅಧಿಕಾರಿಗಳ ಆಸ್ತಿ ಋಣ ಪಟ್ಟಿ, ರಹಸ್ಯ ವರದಿಗಳ ನಿರ್ವಹಣೆ.
7. ಇಲಾಖಾ ವತಿಯಿಂದ ನಡೆಯುವ ಎಲ್ಲಾ ಸ್ಪರ್ಧೆಗಳು ಹಾಗೂ ಕ್ರೀಡೆಗೆ ಸಂಬಂಧಿಸಿದ ಕಾರ್ಯಕ್ರಮಗಳು.
8. ಶಿಕ್ಷಕರ ಕಾರ್ಯಕ್ರಮಗಳು ಹಾಗೂ ಶಾಲಾ ಅಭಿವೃದ್ಧಿ ಮತ್ತು ಉಸ್ತುವಾರಿ ಸಮಿತಿಗಳ ರಚನೆ.
9. ಎಲ್ಲಾ ನೌಕರರ ಜನ್ಮ ದಿನಾಂಕ, ಜಾತಿ, ಹೆಸರು ಬದಲಾವಣೆ ಪ್ರಕರಣಗಳಿಗೆ ಸಂಬಂಧಪಟ್ಟ ನ್ಯಾಯಾಲಯ ಪ್ರಕರಣಗಳು.
10. ಸಂಚಿತ ನಿಧಿ ಹಾಗೂ ವಿಶೇಷ ಬಿಲ್ಲುಗಳ ವೆಚ್ಚದ ಬಗ್ಗೆ ಹಾಗೂ ವಿಶೇಷ ಶುಲ್ಕದ ಆಯವ್ಯಯ ಸರ್ಕಾರೇತರ ನಗದು ವಹಿ ನಿರ್ವಹಣೆ.
11. ಕ್ಷೇತ್ರ ಶಿಕ್ಷಣಾಧಿಕಾರಿಗಳ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ವ್ಯವಸ್ಥಾಪಕರ ಸಭೆ ಇತ್ಯಾದಿ ಆಯೋಜಿಸುವುದು ರಾಷ್ಟ್ರೀಯ ದಿನಾಚರಣೆ, ಶಿಕ್ಷಕರ ಪ್ರಶಸ್ತಿ, ಚುನಾವಣೆ ಇತ್ಯಾದಿ.
12. ಡಿ.ಎಸ್.ಇ.ಆರ್.ಟಿ. ಪುಸ್ತಕ ಹಾಗೂ ಕ್ಯಾಸೆಟ್ ಸರಬರಾಜು, ವಿಜ್ಞಾನ ಕೇಂದ್ರ, ಸಗಟು ಖರೀದಿ ಕಾರ್ಯಕ್ರಮ, ಶಿಕ್ಷಕರ ತರಬೇತಿಗೆ ನಿಯೋಜನೆ.
13. ಹೊರದೇಶ, ಹೊರರಾಜ್ಯ, ಕೇಂದ್ರ ಮಾದರಿ ಶಾಲೆಯಿಂದ ಬಂದಿರುವ ವಿದ್ಯಾರ್ಥಿಗಳಿಗೆ ಪ್ರೌಢಶಾಲಾ ದಾಖಲಾತಿಗೆ ಅನುಮತಿ.

**ಲೆಕ್ಕ ಶಾಖೆ:**

1. ಯೋಜನೇತರ ಆಯವ್ಯಯ, ಹಂಚಿಕೆ ಹಣ, ಕಛೇರಿ ಸಾದಿಲ್ವಾರು, ಖರ್ಚಿನ ತಃಖ್ತೆ, ಯೋಜನೇತರ ಪ್ರೌಢಶಾಲೆಗಳ ಸಾದಿಲ್ವಾರು ಬಿಲ್ಲುಗಳು.
2. ಕಛೇರಿ ಸಿಬ್ಬಂದಿ ವೇತನ, ಮುಂಗಡ ಕಟಾವಣೆ ಇತ್ಯಾದಿ ಅಧಿಕಾರಿ ಮತ್ತು ಸಿಬ್ಬಂದಿಯವರ ಪ್ರಭಾರ ಭತ್ಯೆ ಮಂಜೂರಾತಿ ಕೆ.ಜಿ.ಐ.ಡಿ., ಜಿ.ಪಿ.ಎಫ್., ಸ್ಟೇಷನರಿ ಹಾಗೂ ಮುದ್ರಿತ ಫಾರಂಗಳ ಖರೀದಿ ವ್ಯವಹಾರ.
3. ಎಸ್.ಎಸ್.ಎಲ್.ಸಿ. ಮತ್ತು ಇತರ ಪರೀಕ್ಷೆಗಳು.
4. ಎಲ್ಲಾ ಸರ್ಕಾರಿ ಶಾಲೆಗಳ ವೇತನ ಬಿಲ್ಲುಗಳಿಗೆ ವಿಳಂಬ ವಿನಾಯಿತಿ, ಎಲ್ಲಾ ಸಿಬ್ಬಂದಿಗಳ ಪ್ರಯಾಣ ಭತ್ಯೆ ಬಿಲ್ಲುಗಳ ಮೇಲು ಸಹಿ, ವೈದ್ಯಕೀಯ ವೆಚ್ಚ ಮರು ಪಾವತಿ, ವಿದ್ಯಾರ್ಥಿ ವೇತನ, ರಜಾ ಪ್ರಯಾಣ ಹಾಗೂ ಊರು ಮನೆ ಪ್ರಯಾಣ ಸೌಲಭ್ಯಗಳು.
5. ಕಛೇರಿ ಪೀಠೋಪಕರಣ ಹಾಗೂ ಗ್ರಂಥಾಲಯ ದಾಸ್ತಾನು ನಿರ್ವಹಣೆ, ಸಣ್ಣ ಉಳಿತಾಯ ಯೋಜನೆ, ಕುಟುಂಬ ಕಲ್ಯಾಣ ಯೋಜನೆ.
6. ವಾರ್ಷಿಕ ಯೋಜನೆ ಕರಡು ಹಾಗೂ ವಾರ್ಷಿಕ ಯೋಜನೆಯ ಕ್ರಿಯಾ ಯೋಜನೆ ತಯಾರಿ, ಯೋಜನೆಗಳ ಅನುಷ್ಠಾನದಲ್ಲಿ ಪ್ರಾಥಮಿಕ/ ಪ್ರೌಢಶಾಲೆಗಳಿಗೆ ಪೀಠೋಪಕರಣ ಹಾಗೂ ಕಲಿಕಾ ಸಾಮಗ್ರಿ, ಸಾಧನ ಸಾಮಗ್ರಿ ಸರಬರಾಜು, ಜಿಲ್ಲಾ ಯೋಜನೆಗಳ ಸ್ವೀಕಾರ/ ವಿತರಣೆ.
7. ಯೋಜನೆಯಡಿ ಬರುವ ಪ್ರೌಢಶಾಲೆಗಳ ಸಾದಿಲ್ವಾರು ಬಿಲ್ಲು ಮೇಲು ಸಹಿ, ಶಿಕ್ಷಕರಿಗೆ ವೇತನ ಬಿಡುಗಡೆ ಎಂ.ಎಂ.ಆರ್. ಮಾಹಿತಿ ಒದಗಿಸುವುದು.
8. ಕರಿಹಲಗೆ ಯೋಜನೆಯಡಿಯಲ್ಲಿ ಪ್ರಾಥಮಿಕ ಶಾಲಾ ಕೊಠಡಿಗಳ ನಿರ್ಮಾಣ, ಕಲಿಕಾ ಮತ್ತು ಬೋಧನಾ ಸಾಮಗ್ರಿಗಳ ಸರಬರಾಜು.

**ಅಭಿವೃದ್ಧಿ ಮತ್ತು ಅನುದಾನ ಶಾಖೆ:**

1. ಎಲ್ಲಾ ಸರ್ಕಾರಿ ಸಂಸ್ಥೆಗಳ ಕಟ್ಟಡಗಳ ನಿರ್ಮಾಣ ಹಾಗೂ ದುರಸ್ತಿ, ಕುಡಿಯುವ ನೀರು, ಶೌಚಾಲಯ, ಜಮೀನು, ಭೂ ಸ್ವಾಧೀನತೆ ಇತ್ಯಾದಿ.

2. ಸರ್ಕಾರಿ ಕಟ್ಟಡಗಳ ಬಾಡಿಗೆ ನಗದೀಕರಣ ಹಾಗೂ ವಾರ್ಷಿಕ ಬಾಡಿಗೆ ಬಜೆಟ್ ಪ್ರಸ್ತಾವನೆ.
3. ಪಿಂಚಣಿ ನಿರ್ವಹಣೆ ವಿಮಾ ಪಾಲಿಸಿಗಳ ಮರು ನೀಡಿಕೆ, ಖಾಸಗಿ ಸಿ.ಪಿ.ಎಫ್. ಲೆಕ್ಕ.
4. ವಿದ್ಯಾರ್ಥಿಗಳಿಗೆ ಮಧ್ಯಾಹ್ನ ಉಪಾಹಾರ ಯೋಜನೆ, ಉಚಿತ ಸಮವಸ್ತ್ರ, ಶಾಲಾ ಬ್ಯಾಗುಗಳ ನಿರ್ವಹಣೆ, ಬಾಲ ಕಾರ್ಮಿಕರ ಕಡತ ನಿರ್ವಹಣೆ.
5. ಕಛೇರಿ ತಪಾಸಣೆ ಹಾಗೂ ಮಹಾಲೇಖಪಾಲರ ಆಡಿಟ್ ನಿರ್ವಹಣೆ, ಖಾಸಗಿ ಅನುದಾನಿತ ಶಾಲೆಗಳ ಆಯವ್ಯಯ ತಯಾರಿ.
6. ಎಲ್ಲಾ ಖಾಸಗಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ನೇಮಕಾತಿ ಅನುಮೋದನೆ, ವರ್ಗಾವಣೆ, ಮಾನ್ಯತೆ ನವೀಕರಣ, ಹೆಚ್ಚಿನ ವಿಭಾಗ ತೆರೆಯುವ ಬಗ್ಗೆ ಇತ್ಯಾದಿ.
7. ಅನುದಾನಿತ ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಕರ ಸಿಬ್ಬಂದಿಯವರ ವೇತನ ನಿಗದಿ, ಕಾಲಮಿತಿ ಬಡ್ತಿ ಇತ್ಯಾದಿ.
8. ಅನುದಾನಿತ/ ಅನುದಾನ ರಹಿತ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗೆ ಸಂಬಂಧಪಟ್ಟ ಇತರ ಕೆಲಸಗಳು.

**ಸರ್ವಶಿಕ್ಷಾ ಅಭಿಯಾನ ಶಾಖೆ:**

ಸರ್ವ ಶಿಕ್ಷಾ ಅಭಿಯಾನ ಯೋಜನೆಯಡಿ ಈ ಕೆಳಗಿನ ಕಾರ್ಯಕ್ರಮಗಳನ್ನು ಹಮ್ಮಿಕ್ರೊಳ್ಳಲಾಗಿದೆ.

1. ಪ್ರಾಥಮಿಕ ಶಿಕ್ಷಣ ಸಾರ್ವತ್ರೀಕರಣವನ್ನು 2010ರ ವೇಳೆಗೆ 6-14 ವಯೋಮಾನದ ಎಲ್ಲಾ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ನೀಡುವುದು.
2. ಈ ಕಾರ್ಯಕ್ರಮದಡಿ ಎಲ್ಲಾ ಶಾಲೆಗಳಿಗೆ ಮೂಲಭೂತ ಸೌಕರ್ಯಗಳಾದ ಶಿಕ್ಷಕರು, ಕೊಠಡಿ, ಕಲಿಕಾ ಸಾಮಗ್ರಿ, ನೀರು ಮತ್ತು ಶೌಚಾಲಯ ಹಾಗೂ ಇತರೆ ಸೌಲಭ್ಯಗಳನ್ನು ಒದಗಿಸುವುದು.
3. ಶಾಲೆಗಳಿಂದ ಹೊರಗುಳಿದ ಮಕ್ಕಳಿಗೆ ವಿಶೇಷ ಕಾರ್ಯಕ್ರಮಗಳ ಮೂಲಕ ಎಲ್ಲಾ ಮಕ್ಕಳು ಶಿಕ್ಷಣ ಪಡೆಯುವ ಯೋಜನೆ ಹಮ್ಮಿಕ್ರೊಳ್ಳಲಾಗಿದೆ.

**ಪಠ್ಯ ಪುಸ್ತಕ ಮಳಿಗೆ:**

1. 1 ರಿಂದ 10ನೇ ತರಗತಿ ತನಕದ ವಿದ್ಯಾರ್ಥಿಗಳಿಗೆ ಉಚಿತ ಪುಸ್ತಕ ಸರಬರಾಜು ಮಾಡುವುದು.

**ಆಪ್ತಶಾಖೆ:**

1. ಉಪನಿರ್ದೇಶಕರ ಆಪ್ತಸಹಾಯಕರ ಕೆಲಸ.
2. ಉಪನಿರ್ದೇಶಕರ ಪ್ರವಾಸ ಸೂಚಿ ದಿನಚರಿ, ಎಲ್ಲಾ ಅಧಿಕಾರಿಗಳ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಪ್ರವಾಸ ಕಾರ್ಯಕ್ರಮ ಮತ್ತು ದಿನಚರಿ ಅನುಮೋದನೆ.

**ಗಣಕ ವಿಭಾಗ:**

1. ಎಲ್ಲಾ ಸರ್ಕಾರಿ ಹಾಗೂ ಸರ್ಕಾರೇತರ ಪತ್ರಗಳನ್ನು ಗಣಕಯಂತ್ರದಲ್ಲಿ ದಾಖಲು ಮಾಡುವುದು.
2. ಎಲ್ಲಾ ಮಾಸಿಕ ಹಾಗೂ ಅರ್ಧ ವಾರ್ಷಿಕ ನಿಯತಕಾಲಿಕಗಳನ್ನು ಸಂಬಳ ಬಿಲ್ಲು, ಆಯವ್ಯಯ ಹಾಗೂ ಇತರ ಮಾಹಿತಿಯನ್ನು ಗಣಕ ಯಂತ್ರಕ್ಕೆ ಅಳವಡಿಸುವುದು.

**ಬೆರಳಚ್ಚು ವಿಭಾಗ:**

1. ಕಛೇರಿಯಿಂದ ಹೊರಡಿಸುವ ಪತ್ರಗಳನ್ನು ಹಾಗೂ ಇತರ ಮಾಹಿತಿಯನ್ನು ಬೆರಳಚ್ಚು ಮಾಡುವುದು.

**ಸ್ವೀಕೃತಿ ಮತ್ತು ರವಾನೆ ವಿಭಾಗ:**

ಕಛೇರಿಗೆ ಬರುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ವಿಭಾಗದಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿದ ನಂತರ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ನೀಡಿ ಸ್ವೀಕೃತಿ ಪಡೆಯಲಾಗುವುದು.

ಕಛೇರಿಯಿಂದ ರವಾನೆಯಾಗುವ ಎಲ್ಲಾ ಟಪಾಲುಗಳನ್ನು ರವಾನೆ ವಿಭಾಗದಲ್ಲಿ ದಾಖಲಿಸಿ, ನಿಗದಿತ ಮೊತ್ತದ ಅಂಚೆ ಚೀಟಿ ಅಂಟಿಸಿ, ರವಾನೆ ಮಾಡಲಾಗುವುದು.

**ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆಯ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯ ಅಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯ ನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿಸಿದ ನಂತರ, ಸದ್ರಿ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**ಶೀರ್ಷಿಕೆ-3**

**ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ, ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥ ಪಡಿಸುವುದು.

2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಕ್ಷೇತ್ರ ಶಿಕ್ಷಣಾಧಿಕಾರಿಗಳ ಮಾಸಿಕ ಸಭೆ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ವ್ಯವಸ್ಥಾಪಕರ ಮಾಸಿಕ ಸಭೆ ಏರ್ಪಡಿಸುವುದು.
3. ಆಗಿಂದಾಗ್ಗೆ ಪತ್ರಾಂಕಿತ ಸಹಾಯಕರು ಹಾಗೂ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4. ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರನ್ನು ಜಿಲ್ಲಾ ತರಬೇತಿ ಸಂಸ್ಥೆಯಲ್ಲಿ ತರಬೇತಿಗೆ ನಿಯೋಜಿಸುವುದು.
5. ಸರ್ಕಾರವು/ ಮೇಲಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ಪಾಲಿಸುವುದು.
6. ಸಾರ್ವಜನಿಕ ಕುಂದು ಕೊರತೆಗಳ ನಿವಾರಣೆಯ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವುದು.
7. ವಾರ್ಷಿಕ ಕಾರ್ಯ ನಿರ್ವಹಣಾ ವರದಿಯ ಮೂಲಕ ಇಲಾಖೆಯಲ್ಲಿನ ಅಧಿಕಾರಿಗಳ ಮತ್ತು ನೌಕರರ ಕಾರ್ಯ ನಿರ್ವಹಣೆಯನ್ನು ಮೌಲ್ಯಮಾಪನ ಮಾಡುವುದು.

**ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ಜಿಲ್ಲಾ ಮಟ್ಟದಲ್ಲಿ ಉಪನಿರ್ದೇಶಕರು (ಆಡಳಿತ) ಇವರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರನ್ನು ಮೇಲ್ಮನವಿ ಪ್ರಾಧಿಕಾರಿಯಾಗಿ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ, ಕ್ಷೇತ್ರ ಶಿಕ್ಷಣಾಧಿಕಾರಿಯವರನ್ನು ಸಕ್ಷಮ ಪ್ರಾಧಿಕಾರಿಯಾಗಿಯೂ, ಉಪನಿರ್ದೇಶಕರು (ಆಡಳಿತ) ಇವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ ನೇಮಿಸಲಾಗಿದೆ.
2. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಯಾವುದೇ ಮಾಹಿತಿ ಆದೇಶಗಳನ್ನು ಸಾರ್ವಜನಿಕರ ಮಾಹಿತಿಗಾಗಿ ನೀಡುವುದು.
3. ಸಾರ್ವಜನಿಕರಿಗೆ ಪ್ರತಿ ದಿನ ಅಪರಾಹ್ನ 3 ಗಂಟೆಯ ನಂತರ ಕಛೇರಿಗೆ ಪ್ರವೇಶಿಸಲು ಅವಕಾಶವಿದ್ದು, ಉಪನಿರ್ದೇಶಕರನ್ನು ಭೇಟಿ ಮಾಡಿ ಅಹವಾಲುಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆ.
4. ಸಾರ್ವಜನಿಕ ಕುಂದು ಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿದ್ದು, ಸಾರ್ವಜನಿಕರು ಅವರಿಗೆ ದೂರು ಸಲ್ಲಿಸಿದಲ್ಲಿ, ಅದರ ಬಗ್ಗೆ ತನಿಖೆ ನಡೆಸಿ ಅವರಿಗೆ ನ್ಯಾಯ ಒದಗಿಸಿಕೊಡುವುದು.
5. ಅತೀ ಮುಖ್ಯವಾದ ತುರ್ತಿನ ಮಾಹಿತಿಯಿದ್ದರೆ ಪ್ರಮುಖ ದಿನಪತ್ರಿಕೆಗಳಲ್ಲಿ ಪ್ರಕಟಿಸುವುದು.

ಉಪನಿರ್ದೇಶಕರು (ಆಡಳಿತ)
ಪಿ.ಆರ್.976 ದಕ್ಷಿಣ ಕನ್ನಡ, ಮಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಪ್ರಿಲಿಮಿನರಿ ಅಧಿಸೂಚನೆ

**ನಂ. ಕೆ.ಎ.ಎಸ್.:ಸಿ.ಆರ್:37/94-95, ದಿನಾಂಕ: 29ನೇ ಜೂನ್, 2004**

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿದ ಪ್ರದೇಶದಲ್ಲಿ ಮನೆಗಳು ಒತ್ತೊತ್ತಾಗಿದ್ದು, ಜನಗಳು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲಿ ಇರುವ ಗುಡಿಸಲು ವಾಸಿಗಳಿಗೆ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೆ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ಕೋರಮಂಗಲ ಸ.ನಂ. 101ರ ಸರ್ಕಾರಿ ಕೆರೆ ಆಗಿದ್ದು 1.22 ಎಕರೆ/ ಗುಂಟೆ ವಿಸ್ತೀರ್ಣ ಇದ್ದು ಇಲ್ಲಿ ಸುಮಾರು 300 ಕುಟುಂಬಗಳು ವಾಸವಿರುತ್ತಾರೆಂದು ವರದಿ ಮಾಡಲಾಗಿದೆ. ಈ ಕೊಳಚೆ ಪ್ರದೇಶವು ತಗ್ಗಾದ ಜಾಗದಲ್ಲಿದ್ದು ಹಾಗೂ ಚರಂಡಿ ಪಕ್ಕದಲ್ಲಿದ್ದು ಮಳೆಗಾಲದಲ್ಲಿ ಚರಂಡಿ ತುಂಬಿ ಈ ಪ್ರದೇಶಕ್ಕೆ ನೀರು ನುಗ್ಗಿ ತೊಂದರೆ ಉಂಟಾಗುವುದು ತಿಳಿದು ಬಂದಿರುತ್ತದೆ. ಈ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅಗತ್ಯವೆಂದು ಕಂಡು ಬಂದಿರುತ್ತದೆ.

ಆದ್ದರಿಂದ, ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ, ಸದರೀ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಿಸಲು ನಿರ್ಧರಿಸಲಾಗಿದೆ.

ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಮತ್ತು ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ಇವರಿಗೆ ಲಿಖಿತ ಮೂಲಕ ಅಂತಹ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

### ಷೆಡ್ಯೂಲ್

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯ ಕೋರಮಂಗಲದ ಈಜಿಪುರ-ಬಿ-ಭಾಗದ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರಮ ಸಂಖ್ಯೆ | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶವಿರುವ ಜಮೀನಿನ ಮಾಲೀಕರ ಹೆಸರು | ಸ.ನಂ. | ವಿಸ್ತೀರ್ಣ ಎ.ಗುಂ. | ಚಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
| 1. | ಕೋರಮಂಗಲದ ಈಜಿಪುರ-ಬಿ- ಭಾಗದ ಕೊಳಚೆ ಪ್ರದೇಶ | ಸರ್ಕಾರಿ ಕೆರೆ | 101 | 1.22 | ಸರ್ಕಾರಿ ಕೆರೆ ಉಳಿಕೆ ಭಾಗ | ಹಳ್ಳ | ಈಜಿಪುರದ "ಎ" ಭಾಗದ ಕೊಳಚೆ | ಕೆರೆ ಉಳಿಕೆ ಭಾಗ |

**ಜಿ.ಎಸ್. ನಾರಾಯಣಸ್ವಾಮಿ**
ಪಿ.ಆರ್.977 ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಂತಿಮ ಅಧಿಸೂಚನೆ

**ನಂ. ಕೆ.ಎಸ್.ಎ.ಸಿ.ಆರ್:7/2002-03, ದಿನಾಂಕ: 29ನೇ ಜೂನ್, 2004**

ನಂ.ಕೆ.ಎಸ್.ಎ.ಸಿ.ಆರ್/7/ 02-03, ದಿನಾಂಕ: 18.05.2002ರ ಪ್ರಿಲಿಮಿನರಿ ಅಧಿಸೂಚನೆಯನ್ನು ದಿನಾಂಕ: 20.06.2002ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರೀ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಕೋರಮಂಗಲದ ಲಕ್ಷ್ಮಣರಾವ್ ನಗರ ಕೊಳಚೆ ಪ್ರದೇಶವನ್ನು ಕನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನಾ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರೀ ಪ್ರಿಲಿಮಿನರಿ ಅಧಿಸೂಚನೆಗೆ ಯಾರಿಂದಲೂ ಆಕ್ಷೇಪಣೆಗಳು ಬರದಿದ್ದರಿಂದ, ಪ್ರಶ್ನಿತ ಕೊಳಚೆ ಪ್ರದೇಶವನ್ನು ದಿನಾಂಕ: 17.06.2004ರಂದು ಕೊಳಚೆ ಮಂಡಳಿಯ ಅಧಿಕಾರಿಗಳೊಡನೆ ಸ್ಥಳ ತನಿಖೆ ನಡೆಸಲಾಗಿದೆ. ಪ್ರಶ್ನಿತ ಕೊಳಚೆ ಪ್ರದೇಶವು ಸರ್ಕಾರಿ ಕೆರೆ ಅಂಗಳ ಮತ್ತು ಸರ್ಕಾರಿ ಹಳ್ಳದಲ್ಲಿ ಒಟ್ಟು 21.02 (ಎಕರೆ:ಗುಂಟೆ) ವಿಸ್ತೀರ್ಣದಲ್ಲಿ ಇರುತ್ತದೆ. ಸದರೀ ಕೊಳಚೆ ಪ್ರದೇಶದಲ್ಲಿ ಸರಿಯಾದ ರಸ್ತೆ, ಚರಂಡಿ ವ್ಯವಸ್ಥೆ ಇರುವುದಿಲ್ಲ. ಕುಡಿಯುವ ನೀರನ್ನು ನಗರ ಪಾಲಿಕೆಯ ವತಿಯಿಂದ ಟ್ಯಾಂಕರ್‌ಗಳಲ್ಲಿ ಪೂರೈಕೆ ಮಾಡಲಾಗುತ್ತಿದೆ. ಸದರೀ ಕೊಳಚೆ ಪ್ರದೇಶವನ್ನು ಅಭಿವೃದ್ಧಿ ಪಡಿಸುವುದು ಅತ್ಯಗತ್ಯವಾಗಿರುತ್ತದೆ. ಅಲ್ಲದೆ ಕೊಳಚೆ ಮಂಡಳಿಯಿಂದ ಈಗಾಗಲೇ 300 ವಾಂಭೆ ಮನೆಗಳನ್ನು ನಿರ್ಮಿಸಿರುತ್ತಾರೆ. ಸದರೀ ಕೊಳಚೆ ಪ್ರದೇಶವನ್ನು ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಲು ಯಾವುದೇ ತಕರಾರು ಕಂಡು ಬಂದಿರುವುದಿಲ್ಲ.

ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ "ಕೊಳಚೆ ಪ್ರದೇಶ" ವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯ ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಕೋರಮಂಗಲದ ಸ.ನಂ. 36ರ ಸರ್ಕಾರಿ ಕೆರೆ ಅಂಗಳ ಮತ್ತು ಸರ್ಕಾರಿ ಹಳ್ಳದಲ್ಲಿರುವ ಲಕ್ಷ್ಮಣರಾವ್ ನಗರ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ:

| ಕ್ರಮ ಸಂಖ್ಯೆ | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶವಿರುವ ಜಮೀನಿನ ಮಾಲಿಕರ ಹೆಸರು | ಸ.ನಂ. | ವಿಸ್ತೀರ್ಣ ಎ.ಗುಂ. | ಚೆಕ್ಕುಬಂದಿಗಳು ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
|---|---|---|---|---|---|---|---|---|
| 1. | ಲಕ್ಷ್ಮಣರಾವ್ ನಗರ ಕೊಳಚೆ ಪ್ರದೇಶ, ಕೋರಮಂಗಲ | 1) ಸರ್ಕಾರಿ ಹಳ್ಳ | 36 | 2.04 | ಸ.ನಂ. 36ರ ಕೆರೆ ಅಂಗಳದ ಜಮೀನು | ಹೊಸೂರು ರಸ್ತೆ | ಹಳ್ಳ | ರಸ್ತೆ |
| | | 2) ಸರ್ಕಾರಿ ಕೆರೆ ಅಂಗಳ | 36 | 18.38 | ರಸ್ತೆ ಮತ್ತು ಬೆಂಗಳೂರು ಮಹಾನಗರ ಪಾಲಿಕೆ ಸ್ವತ್ತು | ಸರ್ಕಾರಿ ಹಳ್ಳ | ಹಳ್ಳ ಮತ್ತು ಧೋಬಿ ಘಾಟ್ | ರಾಷ್ಟ್ರೀಯ ಹೈನು ಅಭಿವೃದ್ಧಿ ಕೇಂದ್ರ |

**ಜಿ.ಎಸ್. ನಾರಾಯಣಸ್ವಾಮಿ**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.978

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

### ಅಧಿಸೂಚನೆ

**ಸಂಖ್ಯೆ: 16/ಸಂವಿ/ಸಿ.ಓ.ಪಿ/2004, ದಿನಾಂಕ:29ನೇ ಜೂನ್, 2004**

ಬೆಂಗಳೂರು ನಗರದ ಸಂಚಾರ ಪೂರ್ವ ವಿಭಾಗದ ವ್ಯಾಪ್ತಿಗೆ ಬರುವ ಕನ್ನಿಂಗ್‌ಹ್ಯಾಮ್ ರಸ್ತೆ, ಕ್ವೀನ್ಸ್ ರಸ್ತೆ, ಕಂಟೋನ್ಮೆಂಟ್ ರೈಲ್ವೆ ನಿಲ್ದಾಣ ರಸ್ತೆ, ಜಯಮಹಲ್ ವೃತ್ತ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇತ್ತೀಚೆಗೆ ವಾಹನ ಸಂಚಾರ ಒತ್ತಡ ಅಧಿಕಗೊಂಡು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿದ್ದು ಹಾಗೂ ಸಂಚಾರ ಸ್ಥಗಿತಗೊಳ್ಳುವುದಲ್ಲದೆ ರಸ್ತೆ ಅಪಘಾತಗಳಿಗೂ ಕಾರಣವಾಗಿರುತ್ತದೆ. ಈ ರಸ್ತೆಗಳಲ್ಲಿ ಈ ಹಿಂದೆ ಮಾಡಲಾಗಿದ್ದ ಸಂಚಾರ ನಿರ್ಬಂಧನೆಗಳಲ್ಲಿ ಸಾರ್ವಜನಿಕ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕಾಗಿ ಕೆಲವು ಅಗತ್ಯ ಸಂಚಾರ ಮಾರ್ಪಾಡುಗಳನ್ನು ಮಾಡುವುದು ಅನಿವಾರ್ಯವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. **ಕನ್ನಿಂಗ್‌ಹ್ಯಾಮ್ ರಸ್ತೆ :** ಚಂದ್ರಿಕಾ ಜಂಕ್ಷನ್‌ನಿಂದ ಬಾಳೆಕುಂದ್ರಿ ವೃತ್ತದವರೆವಿಗೆ ಹಾಲಿ ಇರುವ ಅಂದರೆ ಪಶ್ಚಿಮದಿಂದ ಪೂರ್ವಕ್ಕೆ ಸಂಚರಿಸುವ ಎಲ್ಲಾ ವಾಹನಗಳ ಸಂಚಾರವನ್ನು ನಿಷೇಧಿಸಿ ಬಾಳೆಕುಂದ್ರಿ ವೃತ್ತದಿಂದ ಚಂದ್ರಿಕಾ ಜಂಕ್ಷನ್‌ವರೆಗೆ ಪೂರ್ವದಿಂದ ಪಶ್ಚಿಮದ ಕಡೆಗೆ ಚಲಿಸುವಂತೆ ವಾಹನಗಳ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ.

| | | |
|---|---|---|
| 2. | **ಮಿಲ್ಲರ್ ರಸ್ತೆ :** | ಕಂಟೋನ್ಮೆಂಟ್ ರೈಲ್ವೆ ಸೇತುವೆ ವೃತ್ತದಿಂದ ಚಂದ್ರಿಕಾ ಜಂಕ್ಷನ್ ವರೆಗೆ ಹಾಲಿ ಇರುವ ಅಂದರೆ ಉತ್ತರದಿಂದ ದಕ್ಷಿಣಕ್ಕೆ ಸಂಚರಿಸುವ ಎಲ್ಲಾ ವಾಹನಗಳ ಸಂಚಾರವನ್ನು ನಿಷೇಧಿಸಿ ಚಂದ್ರಿಕಾ ಜಂಕ್ಷನ್‌ನಿಂದ ಕಂಟೋನ್ಮೆಂಟ್ ರೈಲ್ವೆ ಸೇತುವೆ ವೃತ್ತದವರೆಗೆ ದಕ್ಷಿಣದಿಂದ ಉತ್ತರದ ಕಡೆಗೆ ಚಲಿಸುವಂತೆ ವಾಹನಗಳ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ. |
| 3. | **ಕಂಟೋನ್ಮೆಂಟ್ ರೈಲ್ವೆ ಸ್ಟೇಷನ್ ರಸ್ತೆ :** | ಕಂಟೋನ್ಮೆಂಟ್ ರೈಲ್ವೆ ಸ್ಟೇಷನ್ ರಸ್ತೆ, ಮಿಲ್ಲರ್ ರಸ್ತೆ ಹಾಗೂ ರೈಲ್ವೆ ಸೇತುವೆ ಜಂಕ್ಷನ್‌ನಿಂದ ಎಲ್ಲಾ ತರಹದ ವಾಹನ ಸಂಚಾರವನ್ನು ಏಕಮುಖ ಸಂಚಾರವಾಗಿ ಕ್ವೀನ್ಸ್ ರಸ್ತೆ ಜಂಕ್ಷನ್ ಕಡೆಗೆ ಅಂದರೆ ಪಶ್ಚಿಮದಿಂದ ಪೂರ್ವದ ಕಡೆಗೆ ಬಿಡಲಾಗುವುದು. |
| 4. | **ಕ್ವೀನ್ಸ್ ರಸ್ತೆ :** | ಕ್ವೀನ್ಸ್ ರಸ್ತೆಯಲ್ಲಿ ಸ್ಟೇಷನ್ ರಸ್ತೆ ಜಂಕ್ಷನ್‌ನಿಂದ ಬಾಳೆಕುಂದ್ರಿ ವೃತ್ತದವರೆಗೆ ಉತ್ತರದಿಂದ ದಕ್ಷಿಣಕ್ಕೆ ಹಾಲಿ ಇರುವ ಸಂಚಾರ ವ್ಯವಸ್ಥೆಯನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ಬಾಳೆಕುಂದ್ರಿ ವೃತ್ತದಿಂದ ಸ್ಟೇಷನ್ ರಸ್ತೆ ಜಂಕ್ಷನ್‌ವರೆಗೆ ದಕ್ಷಿಣದಿಂದ ಉತ್ತರಕ್ಕೆ ಸಂಚರಿಸುವ ಎಲ್ಲಾ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ. |
| 5. | **ಮಿಲ್ಲರ್ ಟ್ಯಾಂಕ್‌ಬಂಡ್ ರಸ್ತೆ :** | ಜೈನ್ ಆಸ್ಪತ್ರೆ ರಸ್ತೆ ಜಂಕ್ಷನ್‌ನಿಂದ ಕನ್ನಿಂಗ್‌ಹ್ಯಾಮ್ ರಸ್ತೆ ಕಡೆಗೆ ಸಂಚರಿಸುವ ಎಲ್ಲಾ ತರಹದ ವಾಹನ ಸಂಚಾರವನ್ನು ನಿಷೇಧಿಸಿ ಕನ್ನಿಂಗ್‌ಹ್ಯಾಮ್ ರಸ್ತೆಯಿಂದ ಬರುವ ವಾಹನಗಳಿಗೆ ಮಿಲ್ಲರ್ ಟ್ಯಾಂಕ್ ಬಂಡ್ ರಸ್ತೆ ಕಡೆಗೆ ಹೋಗಲು ಅವಕಾಶ ಕಲ್ಪಿಸಲಾಗಿದೆ. |

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:10.07.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 01.07.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್.979 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಹುಬ್ಬಳ್ಳಿ ತಾಲ್ಲೂಕು, ಧಾರವಾಡ ಜಿಲ್ಲೆ

## ಅಧಿಸೂಚನೆಯ ಮಾದರಿ

**ಸಂಖ್ಯೆ: ತಾಸಕ: ಸಿ2:ಸಿಆರ್ 16:04-05, ದಿನಾಂಕ: 25ನೇ ಜೂನ್, 2004**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ-56 ಯೋಮಸ-02 (1), ದಿನಾಂಕ: 18.07.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ, 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ, ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2 (ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3 (ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1. ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್‌ನ ವ್ಯಾಪ್ತಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1. ಕಛೇರಿ ಅಧೀಕ್ಷಕರು - 1 ಹುದ್ದೆ
2. ಪ್ರಥಮ ದರ್ಜೆ ಸಹಾಯಕರು - 1 ಹುದ್ದೆ
3. ದ್ವಿತೀಯ ದರ್ಜೆ ಸಹಾಯಕರು - 1 ಹುದ್ದೆ
4. ಬೆರಳಚ್ಚುಗಾರರು - 1 ಹುದ್ದೆ
5. ಗ್ರೂಪ್ 'ಡಿ' ನೌಕರರು - 1 ಹುದ್ದೆ

**ಸೂಚನೆ:** ನಂತರ ಇಲ್ಲಿ ನಿಮ್ಮ ಅಧೀನದಡಿಯಲ್ಲಿ ಬರುವ ಎಲ್ಲಾ ಸಂಸ್ಥೆಗಳ ಹೆಸರು ಮತ್ತು ವಿವರಗಳನ್ನು ನೀಡತಕ್ಕದ್ದು.

1. ಸ.ಮ. ನಂತರದ ಬಿಸಿ ಹಾಸ್ಟೇಲ್ ಹುಬ್ಬಳ್ಳಿ-70
2. ವೃತ್ತಿಪರ ಮ.ನಂತರದ ಬಾಲಕರ ವಸತಿ ನಿಲಯ ಶಿರಡಿನಗರ-50
3. ಸ.ಹ.ಮ. ವಸತಿನಿಲಯ, ಉಣಕಲ್ಲ-50
4. ಸ.ಮ.ಪೂ.ಬಿಸಿ ಹಾಸ್ಟೇಲ್-30
5. ಸ. ಬಾಲಕರ ಮ.ಪೂ. ವಸತಿನಿಲಯ-40
6. ಮಹಿಳಾ ಕ. ಕೇಂದ್ರ, ಸಣ್ಣಕೇರಿ-50
7. ಮಹಿಳಾ ಕ. ಕೇಂದ್ರ, ಇಂದಿರಾನಗರ-50
8. ಮಹಿಳಾ ಕ. ಕೇಂದ್ರ, ಅಯೋಧ್ಯಾ ನಗರ-50
9. ಮಹಿಳಾ ಕ. ಕೇಂದ್ರ, ಎಂಟಿಎಸ್ ಕಾಲನಿ-50
10. ಹೊಲಿಗೆ ತರಬೇತಿ ಕೇಂದ್ರ, ಹುಬ್ಬಳ್ಳಿ-20

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಪ.ಜಾತಿ/ ಪ.ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ಹೊಲಿಗೆ ಯಂತ್ರಗಳ ಸರಬರಾಜು
2. ಕಾನೂನು ಪದವೀಧರರಿಗೆ ಧನಸಹಾಯ
3. ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು
4. ಕಟ್ಟಡಗಳ ನಿರ್ವಹಣೆ
5. ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯವೇತನ
6. ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ
7. ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ
8. ಪ್ರತಿಭಾ ವಿದ್ಯಾರ್ಥಿವೇತನ
9. ಮೆಟ್ರಿಕ್‌ಪೂರ್ವ ವಿದ್ಯಾರ್ಥಿನಿಲಯಗಳು
10. ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ
11. ಪ. ವರ್ಗದ ಮೆಟ್ರಿಕ್‌ನಂತರದ ವಿದ್ಯಾರ್ಥಿವೇತನ (ಸಿ.ಎಸ್.ಎಸ್.)
12. ಮಹಿಳೆಯರಿಗೆ ಟಿ.ಸಿ.ಹೆಚ್. ತರಬೇತಿ
13. ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ
14. 1 ರಿಂದ 4ನೇ ತರಗತಿಯ ವಿದ್ಯಾರ್ಥಿಗಳಲ್ಲಿ ವಿದ್ಯಾರ್ಥಿವೇತನ
15. ಪ.ಜಾತಿಯವರ ಮನೆಗಳಿಗೆ ವಿದ್ಯುತ್ ಪೂರೈಕೆ
16. ಅಸ್ಪೃಶ್ಯತಾ ನಿವಾರಣೆ
17. ದೌರ್ಜನ್ಯಕ್ಕೆ ಒಳಪಟ್ಟ ಪ.ಜಾತಿಯವರಿಗೆ ಪರಿಹಾರ
18. ಜಾತಿ ಪರಿಶೀಲನೆ
19. ಅಂಬೇಡ್ಕರ್ ವಸತಿ ಯೋಜನೆ
20. ಆಶ್ರಯ ವಸತಿ ಯೋಜನೆ

**ಸೂಚನೆ:** ಮೇಲ್ಕಂಡ ಕಾರ್ಯಕ್ರಮಗಳಲ್ಲಿ ತಾಲ್ಲೂಕು ಮಟ್ಟದ ಇನ್ನಾವುದಾದರೂ ಬೇರೆ ಯೋಜನೆಗಳನ್ನು ಸೇರಿಸಬೇಕಾಗಿದ್ದಲ್ಲಿ ಆ ಬಗ್ಗೆ ಪರಿಶೀಲಿಸಿ ಪ್ರಕಟಿಸುವುದು ಮತ್ತು ಸಂಬಂಧಪಡದೇ ಇರುವ ಯೋಜನೆಗಳನ್ನು ಕೈಬಿಡುವುದು.

**2. ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ, ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯ ನಿರ್ವಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು:** ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಇಲ್ಲಿ ಅಂಶವಾರು ಮಾಹಿತಿ ನೀಡುವುದು. ಜಾಬ್ ಚಾರ್ಟ್ ಪ್ರತಿ ಲಗತ್ತಿಸಿದೆ.

**ಸೂಚನೆ:** ಜಾಬ್ ಚಾರ್ಟ್‌ನಲ್ಲಿ ನೀಡಿರುವ ಕರ್ತವ್ಯಗಳಲ್ಲದೇ, ಬೇರೆ ಮಾಹಿತಿಗಳಿದ್ದಲ್ಲಿ, ಅವುಗಳನ್ನು ಸೇರಿಸುವುದು ಹಾಗೂ ಸಂಬಂಧಪಡದ ಮಾಹಿತಿಗಳನ್ನು ಕೈಬಿಡುವುದು.

**3. ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯ ನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರುಸಹಿ ಮಾಡಿಸಿದ ನಂತರ, ಸದರಿ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ, ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**3. ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ, ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3. ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4. ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5. ಸರ್ಕಾರವು/ ಮೇಲಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**4. ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ, ಜಂಟಿ ನಿರ್ದೇಶಕರು (ವಿ.ಘ.ಯೋ.) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂಥಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

**ಸೂಚನೆ:** ಮೇಲೆ ನೀಡಿರುವ ಮಾಹಿತಿಗಳು ಕೇವಲ ಮಾದರಿಗಾಗಿ ನೀಡಿದ್ದು, ಇದರಲ್ಲಿ ಇನ್ನೂ ಹೆಚ್ಚಿನ ಮಾಹಿತಿ ನೀಡಬೇಕಾಗಿದ್ದ ಪಕ್ಷದಲ್ಲಿ ಅದನ್ನು ಸೇರಿಸಿ ಹೊರಡಿಸುವುದು ಮತ್ತು ಸಂಬಂಧಪಡದ ಮಾಹಿತಿಗಳನ್ನು ಕೈಬಿಡುವುದು.

ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು,
ಹುಬ್ಬಳ್ಳಿ ತಾಲ್ಲೂಕು, ಧಾರವಾಡ ಜಿಲ್ಲೆ.

ಪಿ.ಆರ್.980

**ತಹಶೀಲ್ದಾರ್ ರವರ ಕಾರ್ಯಾಲಯ, ಬೆಂಗಳೂರು ಉತ್ತರ ತಾಲ್ಲೂಕು**

**ನಮೂನೆ-27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

**ನಂ.ಎಲ್ಎನ್‌ಡಿ:ಸಿಆರ್: 015:02-03, ದಿನಾಂಕ: 24ನೇ ಫೆಬ್ರವರಿ, 2004**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ,

1) ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರಸಿದ್ದವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸಾರ್ವಜನಿಕ ರಸ್ತೆಯ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ತಮ್ಮ ಸಾರ್ವಜನಿಕ ರಸ್ತೆಯ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2) ಸಾರ್ವಜನಿಕ ಹೆದ್ದಾರಿಯ ಹಕ್ಕಿನ ಜೊತೆಗೆ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕರು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಅನ್ವೇಷಣೆಗಳನ್ನು ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ಸ್ಪಷ್ಟ ಪರಿಹಾರಕ್ಕಾಗಿ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ತಹಶೀಲ್ದಾರ್ ಬೆಂಗಳೂರು ಉತ್ತರ ತಾಲ್ಲೂಕುರವರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೇಮುಗಳನ್ನು ಸದರಿ ಪ್ರಕರಣದಲ್ಲಿ ಉಪ ಸಂಬಂಧಿಸಿರುವಂತೆ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | | | |
|---|---|---|---|
| 1. | ರಸ್ತೆಯ ಭಾಗ ಇತ್ಯಾದಿ ಇರುವ ಗ್ರಾಮ | : | ದಾಸರಹಳ್ಳಿ |
| 2. | ತಾಲ್ಲೂಕು | : | ಬೆಂಗಳೂರು ಉತ್ತರ ತಾಲ್ಲೂಕು |
| 3. | ಜಿಲ್ಲಾ | : | ಬೆಂಗಳೂರು ಜಿಲ್ಲಾ |
| 4. | ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | : | ಸ.ನಂ.42 ಮತ್ತು 45:1 ರ ಮಧ್ಯ ಇರುವ ನಕಾಶೆ ಕಂಡು ಬರುವ ರಸ್ತೆ 0-20 ಗುಂಟೆ |

5. ರಸ್ತೆಯ ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ : 0-28 ಗುಂಟೆ

**ಪೂರ್ವಕ್ಕೆ** : ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 4ಕ್ಕೆ ಹೊಂದಿಕೊಂಡಂತೆ ಹೆಸರುಘಟ್ಟಕ್ಕೆ ಹೋಗುವ ಹಾಲಿ ರಸ್ತೆ ಮತ್ತು ಸ.ನಂ. 45:1 ಜಮೀನು

**ಪಶ್ಚಿಮಕ್ಕೆ** : ಸ.ನಂ.42ರ ಜಮೀನು

**ಉತ್ತರಕ್ಕೆ** : ಸ.ನಂ. 45:1 ಜಮೀನು ಹಾಗೂ ಹೆಸರುಘಟ್ಟಕ್ಕೆ ಹೋಗುವ ಹಾಲಿ ರಸ್ತೆ.

**ದಕ್ಷಿಣಕ್ಕೆ** : ರಿ.ಸ. 40ರ ಜಮೀನು

ಸಾರ್ವಜನಿಕ ರಸ್ತೆ: ಬೀದಿ, ಗಲ್ಲಿ ದಾರಿ ಅಥವಾ ಅದರ ಭಾಗ

ಹಾಗೂ

ಸ.ನಂ. 45:1ರಲ್ಲಿ ಇರುವ 0-36 ಗುಂಟೆ ಹಾಲಿ ರಸ್ತೆಯನ್ನು ಖಾಯಂಗೊಳಿಸಲು ಹಾಲಿ ಚಕ್ಕುಬಂದಿ.

**ಪೂರ್ವಕ್ಕೆ** : ಸ.ನಂ. 45:2

**ಪಶ್ಚಿಮಕ್ಕೆ** : ಸ.ನಂ.45:1

**ಉತ್ತರಕ್ಕೆ** : ಸ.ನಂ. 43 ರಲ್ಲಿ ಹಾಲಿ ರಸ್ತೆ.

**ದಕ್ಷಿಣಕ್ಕೆ** : ಸ.ನಂ. 40 ರಲ್ಲಿ ಹಾಲಿ ರಸ್ತೆ.

ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು,
ಬೆಂಗಳೂರು.

ಪಿ.ಆರ್.993

**IN THE COURT OF THE ADDITIONAL REGISTRAR OF CO-OPERATIVE SOCIETIES (INDL. & MISC.,) BANGALORE-560 052**
**DISPUTE No. A (I/M) DIS/D7/978/2003-2004**

**PETITIONER**
Secretary,
Karnataka Rajya Kaigarika
Sahakara Bank Niyamitha,
Bull Temple Road, Basavanagudi,
Bangalore-560 004.

**RESPONDENTS**
1) M/s Swathi Feedi Abbigeri
Oil Mill Compound, Gadag by its Partner's.
2) Sri Manjunatha,
S/o Basappa, Abbigeri, Partner, M/s Swathi Feedi, CTS No. 3770/8, Abbigeri Compound, Cotton Market Road, Gadag.
3) Sri Kotresh,
S/o Manjunatha Abbigeri, Compound, Cotton Market Road, Gadag.
4) Smt. Mangala,
W/o Manjunatha Abbigeri, Old Sharaffa Bazar, Gadag,
All are residing at old Sharaff Bazar, Gadag District, Gadag.

**NOTICE OF CONDITIONAL ATTACHMENT OF IMMOVABLE PROPERTIES UNDER SECTION 103 OF THE KARNATAKA CO-OPERATIVE SOCIETIES ACT 1959**

Where as, the Petitioner Bank has filed the above dispute before me under section 70 of the Karnataka Co-Operative Societies Act, 1959 for recovery of sum of Rs. 24,00,713-00, along with future interest from the Respondents. The dispute is taken on file under Dispute No. A(I/M)DIS/D7/978/2003-2004, and The same is referred under section 71(1) for disposal to Assistant Registrar of Co-Operative Socieites, Dharwad, which is pending adjudication and the file is called for from the arbitrator for issue of this notice.

2) Whereas, it is brought to my notice by the petitioner Bank by an application filed under Section 103 of the Karnataka Co-operative Societies Act 1959, that the Respondents are contemplating to convey or alienate or dispose the immovable properties belonging to the Respondent's mentioned in the schedule hereunder, with the intent to delay the enforcement or execution of any award or order that may be passed in the above dispute against them. And further submitted that the market value of the property of the Respondent which is offered as security is less than the award amount.

3) Whereas the Petitioner Bank has further stated that if the Respondents are not prevented from doing so, the petitioner society will be left with no means to recover the amount even if any award/ decree is obtained against the Respondents.

4) Whereas, I am fully convinced that the disposal of Schedule property of the Respondent's would defeat or delay the enforcement or execution of any order/ decree that may be passed against the Respondents.

5) Hence, I pass the following order.

## ORDER

Under the circumstances explained above and in exercise of powers vested in me under Section 103 of the Karnataka Co-operative societies Act, 1959, as conferred by the Government Notification No. CMW/169/CLM/2001, dated: 21.10.2001, I, B. Nagaraj, Additional Registrar of Co-operative Societies (Indl. & Miscc.,), Bangalore do hereby order the conditional attachment of the movable/ immovable properties of the Respondent's as mentioned in the Schedule hereunder before judgement in the above case.

Notice is hereby given to the Respondents what if they desire to have the conditional attachment raised, they should furnish cash security to the extent of Rs. 24,01,000-00 by depositing the said amount in the petitioner Co-operative Bank in the name of the Additional Registrar of Co-operative Societies (Indl. & Misc.,) Bangalore under suspense account and produce the original receipt/ challan issued thereon to this office on or before 24.07.2004 without fail.

If they Fail to furnish the cash security as ordered above within the stipulated period, this conditional attachment will be confirmed as made absolute.

Notice is also hereby given to persons purchasing or acquiring the properties mentioned in the Schedule hereunder that they will do so subject to this attachment.

## SCHEDULE OF PROPERTY

1) All that piece and parcel of the agricultural land bearing Sy. No.172/1+2/A measuring 11.05 acres situated at Kalasapura village, Gadag taluk, Gadag district.

2) All the piece and parcel of the agricultural lands situated in Gadag town.

a) Sy. No. 204/B, Plot No.11, measuring 2 acres
b) Sy. No. 204/B, Plot No.12, measuring 2 acres 1 $^{3}/_{4}$ guntas,
c) Sy. No.204/B, Plot No.13, measuring 3 acres 10 $^{3}/_{4}$ guntas,
d) Sy.No.204/B, Plot No.14, measuring 7 acres 5 $^{1}/_{2}$ guntas,
e) Sy.No.204/B, Plot No.15, measuring 1 acres 7 $^{1}/_{2}$ guntas,
f) Sy.No.204/B, Plot No.16, measuring 1 acres 7 $^{1}/_{2}$ guntas,
g) Sy.No.204/B, Plot No.17, measuring 1 acres 7 $^{1}/_{2}$ guntas,
h) Sy.No.204/B, Plot No.18, measuring 18, measuring 1 acre 7 $^{1}/_{2}$ guntas,
i) Sy.No.204/B, Plot No.24, measuring 13 $^{1}/_{4}$ guntas.

Given under my hand and seal this the 17th day of may 2004.

Additional Registrar of C.S.,
(Indl. & Misc.,), Bangalore.

PR-982

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001**

**ಸಂಖ್ಯೆ: ಕರಾಆ:ಆಡಳಿತ:50:2003-04, ದಿನಾಂಕ: 3ನೇ ಜುಲೈ, 2004**

**ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(4) (ಖ) ರಡಿಯಲ್ಲಿ ತಿಳುವಳಿಕೆ**

**ವಿಷಯ :** ಶ್ರೀ ಶಂಕರ, ಗ್ರೂಪ್ 'ಡಿ' ನೌಕರ, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಬೀದರ್ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ.

ಶ್ರೀ ಶಂಕರ, ಗ್ರೂಪ್ 'ಡಿ' ನೌಕರ, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಬೀದರ್ ಆದ ನಿಮಗೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 (4)ರ ಮೇರೆಗೆ ತಿಳುವಳಿಕೆ ಪತ್ರವನ್ನು ದಿನಾಂಕ: 08.03.2004ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿನಾಂಕ: 08.03.2004ರ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಹಾಗೂ ದಿನಾಂಕ:25.03.2004ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸುವುದರ ಮೂಲಕ ಜಾರಿ ಮಾಡಲಾಗಿದ್ದು, ಸದರಿ ತಿಳುವಳಿಕೆಯನ್ನು ನೀವು ಇದುವರೆವಿಗೆ ಬೀದರ್ ಜಿಲ್ಲಾ ವೇದಿಕೆಯಲ್ಲಿ ಪಡೆದುಕೊಳ್ಳದೇ, ದಿನಾಂಕ:08.10.2003ರಿಂದ ಯಾವುದೇ ರಜೆಯ ಮಂಜೂರಾತಿ ಇಲ್ಲದೇ ಕರ್ತವ್ಯಕ್ಕೆ ಗೈರುಹಾಜರಾಗಿರುವುದು ನಿಮ್ಮ ದುರ್ನಡತೆಯನ್ನು ಎತ್ತಿ ತೋರಿಸುತ್ತದೆ. ಈ ದುರ್ನಡತೆಗೆ ಸಂಬಂಧಿಸಿದಂತೆ ಏನಾದರೂ ಹೇಳುವುದಿದ್ದಲ್ಲಿ, ಅಗತ್ಯ ದಾಖಲಾತಿಗಳೊಂದಿಗೆ ದಿನಾಂಕ: 24ನೇ ಜುಲೈ 2004ರಂದು ಬೆಳಿಗ್ಗೆ 11 ಗಂಟೆಗೆ ಸರಿಯಾಗಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001 ಇಲ್ಲಿಗೆ ಬಂದು ಖುದ್ದಾಗಿ ಅಧ್ಯಕ್ಷರನ್ನು ಭೇಟಿಯಾಗಿ ವಿವರಣೆಯನ್ನು ಸಲ್ಲಿಸಲು ಒಂದು ಹೆಚ್ಚುವರಿ ಕಾಲಾವಕಾಶವನ್ನು ನೀಡಲಾಗಿದೆ.

ಒಂದು ವೇಳೆ ಈ ಕಾಲಾವಕಾಶದಲ್ಲಿ ನೀವು ಕರ್ತವ್ಯಕ್ಕೆ ಹಾಜರಾಗಿ ವಿವರಣೆಯನ್ನು ಸಲ್ಲಿಸದೇ ಇದ್ದಲ್ಲಿ, ನಿಮ್ಮ ವಿವರಣೆಯೇನೂ: ಹೇಳಿಕೆಯೇನೂ ಇಲ್ಲವೆಂದು ಏಕಪಕ್ಷೀಯವಾಗಿ ತೀರ್ಮಾನಿಸಿ, ನಿಮ್ಮನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(4) (ಖ) ಮತ್ತು ನಿಯಮ 8ರಡಿಯಲ್ಲಿ ಸೂಕ್ತವೆನಿಸುವ ಶಿಕ್ಷೆಗೆ ಗುರಿಪಡಿಸಲಾಗುವುದು.

**ನ್ಯಾಯಮೂರ್ತಿ ಟಿ. ಜಯರಾಮ ಚೌಟ**
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು.

ಪಿ.ಆರ್. 983